# ಕರ್ನಾಟಕ ವಿಧಾನ ಪರಿಷತ್ತು

01. ಚುಕ್ಕೆ ಗುರುತಿನ ಪ್ರಶ್ನೆ ಸಂಖ್ಯೆ : 522

02. ಮಾನ್ಯ ವಿಧಾನ ಪರಿಷತ್ತಿನ ಸದಸ್ಯರ ಹೆಸರು : ಶ್ರೀ ಕೆ.ಗೋವಿಂದರಾಜ್ (ವಿಧಾನ ಸಭೆಯಿಂದ ಚುನಾಯಿತರಾದವರು)

03. ಉತ್ತರಿಸುವ ದಿನಾಂಕ : 16.09.2021

04. ಉತ್ತರಿಸುವ ಸಚಿವರು. : ಮಾನ್ಯ ಗೃಹ ಸಚಿವರು

| ಕ್ರ.ಸಂ | ಪ್ರಶ್ನೆ | ಉತ್ತರ |
|---|---|---|
| ಅ | ಕಳೆದ 3 ವರ್ಷಗಳ ಅವಧಿಯಲ್ಲಿ ರಾಜ್ಯದಲ್ಲಿ ಸಂಭವಿಸಿರುವ ಲಾಕಪ್‌ಡೆತ್ ಪ್ರಕರಣಗಳು ಎಷ್ಟು; (ಜಿಲ್ಲಾವಾರು, ವರ್ಷವಾರು ಪ್ರತ್ಯೇಕ ಮಾಹಿತಿ ಒದಗಿಸುವುದು) | ರಾಜ್ಯದಲ್ಲಿ ಕಳೆದ 3 ವರ್ಷಗಳ ಅವಧಿಯಲ್ಲಿ ಪೋಲೀಸ್ ಅಭಿರಕ್ಷೆಯಲ್ಲಿ ಸಂಭವಿಸಿದ ಒಟ್ಟು 27 ಮರಣ ಪ್ರಕರಣಗಳ ಜಿಲ್ಲಾವಾರು, ವರ್ಷವಾರು ವಿವರಗಳನ್ನು **ಅನುಬಂಧ–ಅ** ನಲ್ಲಿ ಒದಗಿಸಲಾಗಿದೆ. |
| ಆ | ಈ ಲಾಕಪ್‌ಡೆತ್ ಪ್ರಕರಣಗಳಿಗೆ ಸರ್ಕಾರವು ಕಂಡುಕೊಂಡ ಕಾರಣಗಳು ಏನು; (ಪ್ರಕರಣವಾರು ಪ್ರತ್ಯೇಕ ಮಾಹಿತಿ ಒದಗಿಸುವುದು) | ಪೋಲೀಸ್ ಅಭಿರಕ್ಷೆಯಲ್ಲಿ ಸಂಭವಿಸಿದ ಮರಣ ಪ್ರಕರಣಗಳನ್ನು ಗಂಭೀರವಾದ ಪ್ರಕರಣಗಳೆಂದು ಪರಿಗಣಿಸಿ ತನಿಖೆಯನ್ನು ಸಿಐಡಿ ಘಟಕಕ್ಕೆ ಹಸ್ತಾಂತರಿಸಲಾಗಿದ್ದು, ಸದರಿ ವರದಿಯಾದ ಮರಣ ಪ್ರಕರಣಗಳಲ್ಲಿ ಕೈಗೊಳ್ಳಲಾದ ಕ್ರಮ ಹಾಗೂ ಪ್ರಸ್ತುತ ಹಂತದ ವಿವರವನ್ನು **ಅನುಬಂಧ–ಆ** ದಲ್ಲಿ ನೀಡಲಾಗಿದೆ. |
| ಇ | ಸಂಶಯಾಸ್ಪದ ಕಾರಣವಾಗಿ ಬಂಧಿಸಲಾದ ವ್ಯಕ್ತಿಗಳನ್ನು ಶೀಘ್ರ ನ್ಯಾಯಾಲಯದ ಮುಂದೆ ಹಾಜರುಪಡಿಸುವಲ್ಲಿ ಇರುವ ವಿಳಂಬವನ್ನು ಸರ್ಕಾರವು ಗಂಭೀರವಾಗಿ ಆಲೋಚಿಸಿದೆಯೇ; ಹಾಗಿದ್ದಲ್ಲಿ, ಈ ನಿಟ್ಟಿನಲ್ಲಿ ಇರುವ ನ್ಯೂನ್ಯತೆ ಕುರಿತಾಗಿ ಸಂಪೂರ್ಣ ವಿವರ ಒದಗಿಸುವುದು; | ಬಂಧಿಸಲಾದ ವ್ಯಕ್ತಿಗಳನ್ನು ನ್ಯಾಯಾಲಯದ ಎದುರು ಶೀಘ್ರವಾಗಿ ಹಾಜರುಪಡಿಸದೆ ವಿಳಂಬ ಮಾಡಿದಂತಹ ಪ್ರಕರಣಗಳನ್ನು ಸರ್ಕಾರವು ಗಂಭೀರವಾಗಿ ಪರಿಗಣಿಸುತ್ತದೆ.<br>ಅಪರಾಧ ದಂಡ ಪ್ರಕ್ರಿಯಾ ಸಂಹಿತೆ , 1973ರ ಕಲಂ41 ರನ್ವಯ ಪೋಲೀಸ್ ವಶಕ್ಕೆ ಪಡೆಯಲು ಅನುಸರಿಸಬೇಕಾದ ಕ್ರಮಗಳ ಕುರಿತು ಪೋಲೀಸ್ ಪ್ರಧಾನ ಕಛೇರಿ ಸುತ್ತೋಲೆ ಸಂಖ್ಯೆ: ಅಪರಾಧ–2/92/ವಾರಂಟ್/2012, ದಿನಾಂಕ: 25.07.2012 ರಲ್ಲಿ ಎಲ್ಲಾ ಘಟಕಾಧಿಕಾರಿಗಳಿಗೆ ನಿರ್ದೇಶನ ನೀಡಲಾಗಿದೆ.<br>ಮುಂದುವರೆದು, ಅಪರಾಧ ದಂಡ ಪ್ರಕ್ರಿಯಾ ಸಂಹಿತೆ 1973ರ ಕಲಂ 57 ರನ್ವಯ ಪೋಲೀಸ್ ವಶಕ್ಕೆ ಪಡೆಯಲಾದ ವ್ಯಕ್ತಿಯನ್ನು 24 ಗಂಟೆಗಳ ಅವಧಿಯೊಳಗಾಗಿ ನ್ಯಾಯಾಲಯದ ಮುಂದೆ ಹಾಜರುಪಡಿಸಬೇಕಿದ್ದು, ಇದರನ್ವಯ ಅಗತ್ಯ ಕ್ರಮ ಕೈಗೊಳ್ಳಲಾಗುತ್ತಿದೆ. |
| ಈ | ಲಾಕಪ್‌ಡೆತ್ ಪ್ರಕರಣಗಳನ್ನು ತೊಡೆದು ಹಾಕುವ ನಿಟ್ಟಿನಲ್ಲಿ ಸರ್ಕಾರವು ಸಕಾರಾತ್ಮಕವಾದ ಹಾಗೂ ಪರಿಹಾರಾತ್ಮಕವಾದ ಯೋಜನೆಯನ್ನು ರೂಪಿಸಿದೆಯೇ? ಹಾಗಿದ್ದಲ್ಲಿ, ಈ ಕುರಿತು ಮಾಹಿತಿಯನ್ನು ಒದಗಿಸುವುದು? | ಸ್ಥಾಯಿ ಆದೇಶ ಸಂಖ್ಯೆ: 881 ಹಾಗೂ 937ರಲ್ಲಿ ಪೋಲೀಸ್ ಅಭಿರಕ್ಷೆಯಲ್ಲಿ ಸಂಭವಿಸಿದ ಮರಣ ಪ್ರಕರಣಗಳನ್ನು ತಡೆಗಟ್ಟಲು ಅನುಸರಿಸಬೇಕಿರುವ ಕ್ರಮಗಳ ಕುರಿತು ಘಟಕಾಧಿಕಾರಿಗಳಿಗೆ ನಿರ್ದೇಶನ ನೀಡಲಾಗಿದೆ.<br>ಮುಂದುವರೆದಂತೆ ಘನ ಸರ್ವೋಚ್ಚ ನ್ಯಾಯಾಲಯದ ಪ್ರಕರಣ ಸಂಖ್ಯೆ: 2302 of 2017 in the matter of Shafhi Mohammad V/s The State of Himachal Pradesh ನ ಆದೇಶ |

ದಿನಾಂಕ:03.04.2018 ರಲ್ಲಿ ನೀಡಿರುವ ನಿರ್ದೇಶನಗಳಂತೆ, ರಾಜ್ಯದ ಒಟ್ಟು 1054 ಪೊಲೀಸ್ ಠಾಣೆಗಳಲ್ಲಿ 857 (ಪೊಲೀಸ್ ಆಧುನೀಕರಣ ಯೋಜನೆಯಡಿಯಲ್ಲಿ 774 ಪೊಲೀಸ್ ಠಾಣೆಗಳಿಗೆ ಹಾಗೂ ವಿವಿಧ ಸಂಸ್ಥೆ ಅಥವಾ Contribution ರೀತಿಯಲ್ಲಿ 83 ಪೊಲೀಸ್ ಠಾಣೆಗಳಲ್ಲಿ) ಸಿಸಿಟಿವಿ ಕ್ಯಾಮರಗಳನ್ನು ಈಗಾಗಲೇ ಅಳವಡಿಸಿದ್ದು, ಬಾಕಿ ಉಳಿದಿರುವ 197 ಪೊಲೀಸ್ ಠಾಣೆಗಳಿಗೆ ಶೀಘ್ರದಲ್ಲಿಯೇ ಅಳವಡಿಸುವ ಬಗ್ಗೆ ಈಗಾಗಲೇ ಕಾರ್ಯದೇಶ ನೀಡಲಾಗಿದೆ. ಸಿಸಿಟಿವಿ ಕ್ಯಾಮರಾಗಳನ್ನು ಪೊಲೀಸ್ ಠಾಣೆಗಳ ಪ್ರವೇಶ ದ್ವಾರ, ಸ್ವಾಗತ ಪ್ರದೇಶ, ಠಾಣಾಧಿಕಾರಿಯ ಕೊಠಡಿ ಮತ್ತು ಲಾಕಪ್ ಬಾಗಿಲಿನಲ್ಲಿ ಅಳವಡಿಸಲಾಗುತ್ತಿದೆ ಹಾಗೂ ಸದರಿ ಸಿಸಿಟಿವಿ ಕ್ಯಾಮರಾಗಳ ನಿರ್ವಹಣೆಗಾಗಿ ಸರ್ಕಾರದ ಆದೇಶ ಸಂಖ್ಯೆ: ಹೆಚ್‌ಡಿ 81 ಇಎಫ್‌ಎಸ್ 2020, ದಿನಾಂಕ: 15.12.2020 ರನ್ವಯ ಈ ಕೆಳಕಂಡಂತೆ ರಾಜ್ಯ/ ಜಿಲ್ಲಾ ಮಟ್ಟದ ಮೇಲುಸ್ತುವಾರಿ ಸಮಿತಿಗಳನ್ನು ಸೃಜಿಸಲಾಗಿದೆ.

**ರಾಜ್ಯ ಮಟ್ಟದ ಮೇಲುಸ್ತುವಾರಿ ಸಮಿತಿ**

**(State Level Oversight Committee)**

| | | |
|---|---|---|
| 1 | ಸರ್ಕಾರದ ಅಪರ ಮುಖ್ಯ ಕಾರ್ಯದರ್ಶಿ, ಒಳಾಡಳಿತ ಇಲಾಖೆ | ಅಧ್ಯಕ್ಷರು |
| 2 | ಸರ್ಕಾರದ ಅಪರ ಮುಖ್ಯ ಕಾರ್ಯದರ್ಶಿ, ಆರ್ಥಿಕ ಇಲಾಖೆ | ಸದಸ್ಯರು |
| 3 | ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು | ಸದಸ್ಯರು |
| 4 | ಅಧ್ಯಕ್ಷರು, ರಾಜ್ಯ ಮಹಿಳಾ ಆಯೋಗ | ಸದಸ್ಯರು |

**ಜಿಲ್ಲಾ ಮಟ್ಟದ ಮೇಲುಸ್ತುವಾರಿ ಸಮಿತಿ**

**(District Level Oversight Committee)**

| | | |
|---|---|---|
| 1 | ಪ್ರಾದೇಶಿಕ ಆಯುಕ್ತರು | ಅಧ್ಯಕ್ಷರು |
| 2 | ಜಿಲ್ಲಾಧಿಕಾರಿಗಳು | ಸದಸ್ಯರು |
| 3 | ಪೊಲೀಸ್ ಆಯುಕ್ತರು | ಸದಸ್ಯರು |
| 4 | ಜಿಲ್ಲಾ ಪೊಲೀಸ್ ಅಧೀಕ್ಷಕರು | ಸದಸ್ಯರು |
| 5 | ಜಿಲ್ಲಾ ವ್ಯಾಪ್ತಿಯಲ್ಲಿ ಮಹಾ ನಗರ ಪಾಲಿಕೆಯ ಮೇಯರ್ | ಸದಸ್ಯರು |
| 6 | ಜಿಲ್ಲಾ ಪಂಚಾಯತ್‌ನ ಅಧ್ಯಕ್ಷರು | ಸದಸ್ಯರು |

HD 22 SDN 2021

(ಅರಗ ಜ್ಞಾನೇಂದ್ರ)
ಗೃಹ ಸಚಿವರು